# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ವಿಜಯ ಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 62
ಉತ್ತರಿಸಬೇಕಾದ ದಿನಾಂಕ : 15-7-2019
ಉತ್ತರಿಸುವ ಸಚಿವರು : ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| (ಅ) | ಬೀದರ್ ಜಿಲ್ಲೆಯಲ್ಲಿರುವ ಜಾನುವಾರುಗಳ ಸಂಖ್ಯೆ ಎಷ್ಟು; (ತಾಲ್ಲೂಕುವಾರು ವಿವರ ನೀಡುವುದು) | ಬೀದರ್ ಜಿಲ್ಲೆಯಲ್ಲಿನ ಜಾನುವಾರುಗಳ ತಾಲ್ಲೂಕುವಾರು ವಿವರ. (2012 ರ ಜಾನುವಾರು ಗಣತಿ ಪ್ರಕಾರ) (ತಾಲ್ಲೂಕುವಾರು ವಿವರ ಕೆಳಗಿನ ಕೋಷ್ಟಕದಲ್ಲಿ) |
| (ಆ) | ಜಿಲ್ಲೆಯಲ್ಲಿ ಜಾನುವಾರುಗಳಿಗೆ ಮೇವಿನ ಸಮಸ್ಯೆ ಎದುರಾಗಿದ್ದು ರೈತರು ತಮ್ಮ ಜಾನುವಾರುಗಳನ್ನು ಕಸಾಯಿ ಖಾನೆಗೆ ಕಳುಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು; | ಮೇವಿನ ಸಮಸ್ಯೆಯಿಂದ ರೈತರು ಜಾನುವಾರುಗಳನ್ನು ಕಸಾಯಿ ಖಾನೆಗೆ ಕಳುಹಿಸುತ್ತಿರುವ ಪ್ರಕರಣಗಳು ಜಿಲ್ಲೆಯಲ್ಲಿ ಕಂಡು ಬಂದಿರುವುದಿಲ್ಲ.<br><br>ಬೀದರ ಜಿಲ್ಲೆಯಲ್ಲಿ ಹಿಂಗಾರು ಹಂಗಾಮಿನಲ್ಲಿ ಇಪ್ಪತ್ತೊಂದು ಸಾವಿರ ಹೆಕ್ಟೇರ್‌ನಲ್ಲಿ ಬಿಳಿ ಜೋಳದ ಬೆಳೆ ಉತ್ತಮವಾಗಿ ಬಂದಿದ್ದು, 1.05ಲಕ್ಷ ಟನ್ ಮೇವು (ಬಿಳಿಜೋಳದ ದಂಟು) ಸಂಗ್ರಹಣೆ ಮಾಡಿಕೊಳ್ಳಲಾಗಿದೆ. ನೀರಾವರಿ ಸೌಕರ್ಯಗಳಿರುವ ರೈತರಿಗೆ ಮೇವು ಬೆಳೆಯಲು ಇಲಾಖೆಯಿಂದ 49220 ಮೇವಿನ ಬೀಜದ ಮಿನಿಕಿಟ್‌ಗಳನ್ನು ಉಚಿತವಾಗಿ ವಿತರಿಸಲಾಗಿದೆ. ಜಿಲ್ಲೆಯಲ್ಲಿ 15 ಮೇವು ನಿಧಿ ಕೇಂದ್ರಗಳನ್ನು ತೆರೆದು ಇಲ್ಲಿಯವರೆಗೆ 842 ಮೆಟ್ರಿಕ್ ಟನ್ ಮೇವು ಖರೀದಿಸಿ ಪ್ರತಿ ಕೆ.ಜಿ.ಗೆ ರೂ. 2-00 ರಂತೆ ರಿಯಾಯಿತಿ ದರದಲ್ಲಿ 5037 ರೈತರಿಗೆ ವಿತರಿಸಲಾಗಿದೆ. |
| (ಇ) | ಮೇವಿಗಾಗಿ ರೈತರು ಜಿಲ್ಲೆಯ ತಾಲ್ಲೂಕು ಕೇಂದ್ರಗಳಲ್ಲಿ ಇರುವ ಮೇವಿನ ಕೇಂದ್ರದಲ್ಲಿ ದಿನ ಪೂರ್ತಿ ಕುಳಿತರು ಮೇವು ಸಿಗುತ್ತಿಲ್ಲದಿರುವುದಕ್ಕೆ ಕಾರಣಗಳೇನು; | ಪ್ರತಿದಿನ ರೈತರ ಹೆಸರುಗಳನ್ನು ಮೇವು ಸರಬರಾಜಿಗಾಗಿ ನೊಂದಾಯಿಸಿಕೊಂಡು ಮೇವಿನ ಸರಬರಾಜು ವಾಹನ ಬಂದ ತಕ್ಷಣವೇ ನೊಂದಣಿಯ ಜೇಷ್ಠತೆ ಅನುಸಾರ ರೈತರ ಬೇಡಿಕೆಗೆ ಅನುಗುಣವಾಗಿ ಮೇವು ವಿತರಿಸಲಾಗುತ್ತಿದೆ. ಹೆಚ್ಚಿನ ಬೇಡಿಕೆ ಇರುವುದರಿಂದ, ಬೇಡಿಕೆಗನುಗುಣವಾಗಿ ಮೇವು ಖರೀದಿಸಿ ವಿತರಣೆಗೆ ಕ್ರಮವಹಿಸಲಾಗಿದೆ. |
| (ಈ) | ಮಳೆ ಇಲ್ಲದ ಕಾರಣ ಮೇವಿನ ಬೇಡಿಕೆ ಇದ್ದು ವಲಯವಾರು ಗೋ-ಶಾಲೆಗಳನ್ನು ತೆರೆಯಲು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | 842 ಮೆಟ್ರಿಕ್ ಟನ್ ಮೇವು ಖರೀದಿಸಿ ಜಾನುವಾರು ಮಾಲೀಕರಿಗೆ ರಿಯಾಯತಿ ದರದಲ್ಲಿ ಮೇವು ಸರಬರಾಜು ಮಾಡಲಾಗಿರುತ್ತದೆ. ವಲಯವಾರು ಗೋ-ಶಾಲೆ ತೆರೆಯುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

(ಅ) ಉತ್ತರದ ಕೋಷ್ಟಕ:

| ಕ್ರಮ ಸಂಖ್ಯೆ | ತಾಲ್ಲೂಕಿನ ಹೆಸರು | ಜಾನುವಾರುಗಳ ಸಂಖ್ಯೆ |
|---|---|---|
| 1 | ಔರಾದ (ಬಿ) | 81636 |
| 2 | ಬೀದರ | 57500 |
| 3 | ಭಾಲ್ಕಿ | 86665 |
| 4 | ಬಸವಕಲ್ಯಾಣ | 73834 |
| 5 | ಹುಮನಾಬಾದ | 65314 |

ಪಸಂಮೀ 12 ಸಲೆವಿ 2019

(ವೆಂಕಟರಾವ್ ನಾಡಗೌಡ)
ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವರು